# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2006.
2. ಮಾನ್ಯ ಸದಸ್ಯರ ಹೆಸರು : ಶ್ರೀ ಆಯನೂರು ಮಂಜುನಾಥ್
2. ಉತ್ತರಿಸುವ ದಿನಾಂಕ : 16-03-2022.
4. ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು.

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕಾಮಗಾರಿಗಳನ್ನು ತಾಂತ್ರಿಕವಾಗಿ ನಿರ್ವಹಿಸಲೆಂದು ಲೋಕೋಪಯೋಗಿ ಇಲಾಖೆ ಇದ್ದು, ಆದರಿಂದ ಇಲಾಖೆಯಿಂದ ಉತ್ತಮ ಕಾರ್ಯ ನಿರ್ವಹಿಸುವ ಬಗ್ಗೆ ದಾಖಲೆಗಳಿವೆಯೇ; ಹಾಗಿದ್ದರೂ ವಿವಿಧ ಇಲಾಖೆಯಲ್ಲಿ ಇಂಜಿನಿಯರಿಂಗ್ ವಿಭಾಗ ಸೃಜಿಸಿರಲು ಕಾರಣವೇನು; (ವಿವರವಾದ ಮಾಹಿತಿ ಒದಗಿಸುವುದು) | ವಿವಿಧ ಇಲಾಖೆ ಹಾಗೂ ವಿವಿಧ ನಿಗಮ ಮಂಡಳಿಗಳಲ್ಲಿನ ಕಾಮಗಾರಿಗಳನ್ನು ಪರಿಣಾಮಕಾರಿಯಾಗಿ ಕೈಗೊಳ್ಳಲು ಆ ಇಲಾಖೆ / ನಿಗಮ ಮಂಡಳಿಗಳಿಗೆ ನಿಗಧಿಪಡಿಸಲಾದ ಅನುದಾನ ಹಾಗೂ ಸಂಪನ್ಮೂಲಗಳ ಆಧಾರದ ಮೇರೆಗೆ ಅನುಮೋದಿತ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತಿದೆ. ಹಾಗೂ ಸರ್ಕಾರದ ಆಡಳಿತಾತ್ಮಕ ಅನುಮೋದನೆ ಪಡೆದು ಪ್ರತ್ಯೇಕ ಇಂಜಿನಿಯರಿಂಗ್ ವಿಭಾಗಗಳನ್ನು ಸೃಜಿಸಲಾಗಿರುತ್ತದೆ. ಆದ್ದರಿಂದ ಇಲಾಖೆ / ನಿಗಮ ಮಂಡಳಿಗಳ ಕಾಮಗಾರಿಗಳನ್ನು ನಿರ್ವಹಿಸಲು ಲೋಕೋಪಯೋಗಿ ಇಲಾಖೆಯ ಇಂಜಿನಿಯರ್‌ಗಳ ಸೇವೆಯನ್ನು ನಿಯೋಜನೆ ಮೇರೆಗೆ ಪಡೆದು ಉತ್ತಮ ಕೆಲಸ ನಿರ್ವಹಿಸಲಾಗುತ್ತಿದೆ. |
| ಆ | ವಿವಿಧ ಇಲಾಖೆಯಲ್ಲಿ ಇಂಜಿನಿಯರಿಂಗ್ ವಿಭಾಗ ಸೃಜಿಸಿರುವುದರಿಂದ ಆಗುತ್ತಿರುವ ಸೋರಿಕೆ ತಡೆಯುವ ಸಲುವಾಗಿ ಮತ್ತು ಬೊಕ್ಕಸಕ್ಕೆ ಆಗುತ್ತಿರುವ ಅನಾವಶ್ಯಕ ಖರ್ಚಿಗೆ ಕಡಿವಾಣ ಹಾಕಲು ಸರ್ಕಾರ ಕೈಗೊಂಡ ಕ್ರಮಗಳಾವುವು ? (ವಿವರ ನೀಡುವುದು) | ವಿವಿಧ ಇಲಾಖೆ ಹಾಗೂ ವಿವಿಧ ನಿಗಮ ಮಂಡಳಿಗಳಲ್ಲಿನ ಕಾಮಗಾರಿಗಳನ್ನು ಆ ಇಲಾಖೆ / ನಿಗಮ ಮಂಡಳಿಗಳಿಗೆ ನಿಗಧಿಪಡಿಸಲಾದ ಅನುದಾನ ಹಾಗೂ ಸಂಪನ್ಮೂಲಗಳ ಆಧಾರದ ಮೇರೆಗೆ ಹಾಗೂ ಸರ್ಕಾರದ ಆಡಳಿತಾತ್ಮಕ ಅನುಮೋದನೆ ಮೇರೆಗೆ ಪ್ರತ್ಯೇಕ ಕಾಮಗಾರಿ ವಿಭಾಗಗಳು ಸೃಜಿಸಲಾಗಿರುವುದರಿಂದ ಬೊಕ್ಕಸಕ್ಕೆ ಅನಾವಶ್ಯಕ ವೆಚ್ಚ ಉಂಟಾಗಿರುವ ಪ್ರಶ್ನೆ ಉದ್ಭವಿಸುವುದಿಲ್ಲ. |

**ಲೋಇ 11 ಸೇಸಪ 2022**

(ಸಿ.ಸಿ. ಪಾಟೀಲ್)
ಮಾನ್ಯ ಲೋಕೋಪಯೋಗಿ ಸಚಿವರು